ಸದನದಲ್ಲಿ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೊಂದನೆಯ ಅಧಿವೇಶನ

ಗುರುವಾರ, ದಿನಾಂಕ : 24 ನೇ ಸೆಪ್ಟೆಂಬರ್, 2020

ಹೇಮಾವತಿ ನಾಲೆ ದುರಸ್ತಿ ಮತ್ತು ಆಧುನೀಕರಣ

ಶ್ರೀ ಎನ್. ಅಪ್ಪಾಜಿಗೌಡ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) –

52 (501) ಜಲಸಂಪನ್ಮೂಲ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ಮಂಡ್ಯ ಜಿಲ್ಲೆಯ ನಾಗಮಂಗಲ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ನಂ.7, ಕಾರ್ಯಪಾಲಕ ಅಭಿಯಂತರರ ಕಛೇರಿ, ಹೇಮಾವತಿ ನಾಲಾ ವಿಭಾಗ, ನಾಗಮಂಗಲ ಮತ್ತು ಕಾರ್ಯಪಾಲಕ ಅಭಿಯಂತರರು, ಯಡಿಯೂರು ವಿಭಾಗ, ವ್ಯಾಪ್ತಿಯಲ್ಲಿ ಬರುವ ಕಾಲುವೆಗಳಲ್ಲಿ ನೀರು ಹರಿಸುವ ಸಂಬಂಧ ಕಾಲುವೆಗಳ ದುರಸ್ತಿ ಅಥವಾ ಆಧುನೀಕರಣ ಮಾಡಲು 2018-19ನೇ ಸಾಲಿನಿಂದ ಇಲ್ಲಿಯವರೆಗೆ ಮಂಜೂರಾಗಿರುವ ಕಾಮಗಾರಿಗಳಾವುವು; (ವಿವರವಾದ ಮಾಹಿತಿ ನೀಡುವುದು)

(ಆ) ಈ ಮೇಲ್ಕಂಡ ಕಾಮಗಾರಿಗಳಲ್ಲಿ ಟೆಂಡರ್ ಮೊತ್ತಕ್ಕಿಂತ ಶೇಕಡಾ 35-45 ಕಡಿಮೆ ದರಕ್ಕೆ ಗುತ್ತಿಗೆದಾರರು ಟೆಂಡರ್ ಹಾಕಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಕಾಮಗಾರಿಗಳು ಗುಣಮಟ್ಟದಿಂದ ಕೂಡಿರಲು ಸಾಧ್ಯವೇ; (ವಿವರವಾದ ಮಾಹಿತಿ ನೀಡುವುದು)

(ಇ) ಈ ಸಂಬಂಧ ಗುತ್ತಿಗೆದಾರರು ಮತ್ತು ಇಲಾಖಾ ಅಧಿಕಾರಿಗಳು ಕಾಮಗಾರಿ ಮಾಡದೆ ಬಿಲ್ಲು ಪಡೆಯುವ ಉದ್ದೇಶವಿದೆಯೇ; ಈ ಕಾಮಗಾರಿಗಳ ಟೆಂಡರ್ ಪ್ರಕ್ರಿಯೆಯನ್ನು ತಡೆಹಿಡಿದು ಉನ್ನತ ಮಟ್ಟದ ತನಿಖಾ ತಂಡದಿಂದ ತನಿಖೆ ಮಾಡುವ ಉದ್ದೇಶ ಸರ್ಕಾರದ ಮುಂದೆ ಇದೆಯೇ? (ವಿವರವಾದ ಮಾಹಿತಿ ನೀಡುವುದು)